## ಕರ್ನಾಟಕ ವಿಧಾನ ಪರಿಷತ್ತು

1. ಚುಕ್ಕೆ ಗುರುತಿಲ್ಲದ ಪ್ರಶ್ನೆ ಸಂಖ್ಯೆ : 1154
2. ಸದಸ್ಯರ ಹೆಸರು : ಶ್ರೀ ಯು.ಬಿ. ವೆಂಕಟೇಶ್
3. ಉತ್ತರಿಸುವ ದಿನಾಂಕ : 23-12-2021
4. ಉತ್ತರಿಸುವವರು : ಮುಖ್ಯಮಂತ್ರಿಗಳು

| ಕ್ರ ಸಂ. | ಪ್ರಶ್ನೆ | ಉತ್ತರ |
|---|---|---|
| ಅ | ಬೆಂಗಳೂರು ನಗರವನ್ನು ಸುತ್ತುವರಿದಿರುವ ವಿಧಾನಸಭಾ ಕ್ಷೇತ್ರ ವ್ಯಾಪ್ತಿಯ ಗ್ರಾಮಗಳನ್ನು ಪಾಲಿಕೆಗೆ ಸೇರ್ಪಡೆ ಮಾಡುವ ಉದ್ದೇಶಿತ ಕಾರ್ಯಕ್ಕೆ ಹಿನ್ನಡೆಯಾಗಿರುವುದನ್ನು ಸರ್ಕಾರ ಗಮನಿಸಿದೆಯೇ; | ಸರ್ಕಾರವು ಅಧಿಸೂಚನೆ ಸಂಖ್ಯೆ: ನಅಇ 17 ಬಿಬಿಎಲ್ 2020(ಭಾಗ-1)(ಇ), ದಿನಾಂಕ: 14-10-2020ರಲ್ಲಿ ಕೆ.ಎಂ.ಸಿ. ಕಾಯ್ದೆ, 1976ರ(1977ರ ಕರ್ನಾಟಕ ಅಧಿನಿಯಮ, 14)ರ 21ನೇ ಪ್ರಕರಣದ (2)(ಎ) ಉಪ ಪ್ರಕರಣದನ್ವಯ ಪ್ರದತ್ತವಾದ ಅಧಿಕಾರವನ್ನು ಚಲಾಯಿಸಿ, ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶಕ್ಕೆ ಸಂಬಂಧಿಸಿದಂತೆ ವಾರ್ಡ್‌ಗಳನ್ನು ಪುನರ್ ವಿಂಗಡಣೆಗಾಗಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಆಯುಕ್ತರ ಅಧ್ಯಕ್ಷತೆಯಲ್ಲಿ ವಾರ್ಡ್‌ಗಳ ಪುನರ್ ವಿಂಗಡಣಾ ಸಮಿತಿಯನ್ನು ರಚಿಸಲಾಗಿತ್ತು.<br><br>ಮುಂದುವರೆದು, ದಿನಾಂಕ: 11-01-2021 ರಿಂದ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆ ಅಧಿನಿಯಮ, 2020 ಜಾರಿಗೆ ಬಂದಿದ್ದು, ಸದರಿ ಅಧಿನಿಯಮದ 7ನೇ ಪ್ರಕರಣದ (3)ನೇ ಉಪಪ್ರಕರಣದ ಖಂಡ (ಎ)ರ ಪರಂತುದನ್ವಯ ಅಧಿಕಾರವನ್ನು ಚಲಾಯಿಸಿ, ಸರ್ಕಾರವು ಅಧಿಸೂಚನೆ ಸಂಖ್ಯೆ: ನಅಇ 17 ಬಿಬಿಎಲ್ 2020 (ಭಾಗ-1)(ಇ), ದಿನಾಂಕ: 29-01-2021ರಲ್ಲಿ ಬೃಹತ್ ಬೆಂಗಳೂರು ಮಹಾನಗರ ಪಾಲಿಕೆಯ ಪ್ರದೇಶಕ್ಕೆ ಸಂಬಂಧಿಸಿದಂತೆ ವಾರ್ಡ್‌ಗಳನ್ನು ಪುನರ್ ವಿಂಗಡಣೆಗಳಿಗಾಗಿ 6 (ಆರು) ತಿಂಗಳ ಅವಧಿಗೆ ಸೀಮಿತವಾಗಿ ಪಾಲಿಕೆಯ ಮುಖ್ಯ ಆಯುಕ್ತರ ಅಧ್ಯಕ್ಷತೆಯಲ್ಲಿ ವಾರ್ಡ್‌ಗಳ ಪುನರ್ ವಿಂಗಡಣಾ ಸಮಿತಿಯನ್ನು ರಚಿಸಲಾಗಿದ್ದು, ಸಮಿತಿಯ ಕಾಲಾವಧಿಯನ್ನು ದಿನಾಂಕ: 28-07-2021ರಿಂದ ಜಾರಿಗೆ ಬರುವಂತೆ 06 ತಿಂಗಳ ಅವಧಿಗೆ ಮುಂದುವರೆಸಲಾಗಿದ್ದು, ಸಮಿತಿಯ ಶಿಫಾರಸ್ಸಿನನ್ವಯ ಪರಿಶೀಲಿಸಿ ಮುಂದಿನ ಕ್ರಮ ವಹಿಸಲಾಗುವುದು. |
| ಆ | ನಗರೀಕರಣದ ಸ್ಪರ್ಶ ಪಡೆದಿರುವ ಇಂತಹ ಗ್ರಾಮಗಳನ್ನು ಬಿ.ಬಿ.ಎಂ.ಪಿ. ಮಡಿಲು ಸೇರಿಸಿ ವಾರ್ಡ್‌ಗಳ ಸಂಖ್ಯೆಯನ್ನು 194 ರಿಂದ 243ಕ್ಕೆ ಹೆಚ್ಚಿಸುವ ಪ್ರಕ್ರಿಯೆ ಯಾವ ಹಂತದಲ್ಲಿದೆ; | |
| ಇ | ಆದಷ್ಟು ಶೀಘ್ರ ವಾರ್ಡ್‌ಗಳ ಸಂಖ್ಯೆಯನ್ನು ಹೆಚ್ಚಿಸಿ, ಅಭಿವೃದ್ಧಿ ಪೂರಕವಾದ ಕಾಮಗಾರಿಗಳನ್ನು ಕೈಗೊಳ್ಳಲಾಗುವುದೇ? | |

**ಸಂಖ್ಯೆ: ನಅಇ 137 ಬಿಬಿಎಸ್ 2021(ಇ)**

(ಬಸವರಾಜ ಬೊಮ್ಮಾಯಿ)
ಮುಖ್ಯಮಂತ್ರಿ